ಪ್ರವಾದಿ(ﷺ) ಯವರು ಬಡ್ಡಿಯನ್ನು ಏಳು ಮಹಾಪಾಪಗಳಲ್ಲಿ ಒಂದು ಎಂದು ಪರಿಗಣಿ-ಸಿದ್ದಾರೆ. ಆದ್ದರಿಂದ ಬಡ್ಡಿಯ ಕುರಿತು ತಿಳಿದು ಎಚ್ಚರ-ವಹಿಸಬೇಕಾದದ್ದು ನಮ್ಮ ಅನಿವಾರ್ಯ ಕರ್ತವ್ಯಗಳಲ್ಲಿ ಒಂದಾಗಿದೆ.

ಪ್ರವಾದಿ(ﷺ) ಯವರು ಹೇಳಿದರು: "ಬಡ್ಡಿ ಏಳು ವಿ-ಧಗಳಲ್ಲಿದೆ. ಬಡ್ಡಿಯ ಪೈಕಿ ಅತ್ಯಂತ ಚಿಕ್ಕದು ಒಬ್ಬ ತನ್ನ ತಾಯಿಯೊಡನೆ ವ್ಯಭಿಚಾರ ಮಾಡುವುದಕ್ಕೆ ಸಮಾನ-ವಾಗಿದೆ." (ಬೈಹಕಿ, ಇಬ್ನ್ ಮಾಜ)

ಈ ಉಪಮೆಯಿಂದ ಬಡ್ಡಿ ಎಷ್ಟರಮಟ್ಟಿಗೆ ಅಸಹ್ಯವೆಂದು ಸ್ಪಷ್ಟವಾಗುತ್ತದೆ. ಕುರ್‌ಆನ್ ಅವತೀರ್ಣಗೊಂಡ ಸಂ-ದರ್ಭದಲ್ಲಿ ಅಜ್ಞಾನಿಗಳಾದ ಅರಬಿ ಸಮುದಾಯದಲ್ಲಿ ಎರಡು ವಿಧದ ಬಡ್ಡಿ ರೂಢಿಯಲ್ಲಿತ್ತು. ಅವಧಿಯ ಬಡ್ಡಿ ಮತ್ತು ಮಿಗತೆ ಬಡ್ಡಿ.

## ಅವಧಿಯ ಬಡ್ಡಿ

ಸಾಲಗಾರರಿಂದ ಅವಧಿ (ಕಾಲಾವಕಾಶ)ಯ ಹೆಸರಲ್ಲಿ ವಸೂಲು ಮಾಡುವ ಆದಾಯ. ಈ ವಿಭಾಗದಲ್ಲಿ ಮೂರು ರೀತಿಯ ವ್ಯವಹಾರಗಳಿದ್ದವು.

1. ಕಾಲಾವಕಾಶವನ್ನು ನಿರ್ಧರಿಸಿ ಮಾಡುವ ವಸ್ತುವಿನ ಬೆಲೆಯನ್ನು ಸಾಲಗಾರ ಅವಧಿಗೆ ನೀಡುವುದಿಲ್ಲ ಎಂದಾದರೆ ಸಾಲಗಾರನಿಗೆ ಅವಧಿ ವಿಸ್ತರಿಸುವುದರ ಪ್ರಕಾರ ಬೆಲೆ ಹೆಚ್ಚಿಸುವುದು.

2. ಸಮಯಾವಕಾಶವನ್ನು ನಿರ್ಧರಿಸಿ ಇಂತಹ ಸಮಯಕ್ಕೆ ಇಷ್ಟು ಪ್ರಮಾಣದಲ್ಲಿ ಬೆಲೆ ನೀಡಬೇಕೆಂಬ ನಿಶ್ಚಯದಲ್ಲಿ ಸಾಲ ಕೊಡುವುದು.

3. ಸಾಲಕ್ಕೆ ಒಂದು ನಿಶ್ಚಿತ ಅವಧಿಯನ್ನು ನೀಡಿ ಅಂದು (ಮರಳಿಸುವ ದಿನ) ಇಷ್ಟು ಮೊತ್ತಕ್ಕೆ ಇಷ್ಟು ಸಿಗಬೇಕೆಂದು ನಿಶ್ಚಯಿಸುವುದು.

ಹೀಗೆ ಸಾಲಕ್ಕೆ ಅವಧಿ ನೀಡುವುದರ ಹೆಸರಲ್ಲಿ ಮೂಲ ಬಂಡವಾಳಕ್ಕಿಂತ ಹೆಚ್ಚಿನ ಮೊತ್ತವನ್ನು ಪಡೆಯುವುದೇ ಬಡ್ಡಿ. ಆಧುನಿಕ ಕಾಲದಲ್ಲಿ ಚಾಲ್ತಿಯಲ್ಲಿರುವ ಬಡ್ಡಿ ವ್ಯವಹಾರವು ಮೇಲಿನ ಯಾವುದಾದರೂ ಒಂದು ವಿಭಾಗಕ್ಕೆ ಸೇರುತ್ತದೆ.

## ಮಿಗತೆ ಬಡ್ಡಿ

ಚಿನ್ನಕ್ಕೆ ಬದಲಾಗಿ ಚಿನ್ನ, ಗೋಧಿಗೆ ಬದಲಾಗಿ ಗೋಧಿ ಎಂಬಂತೆ ಒಂದು ವಸ್ತುವನ್ನು ಅದೇ ಗುಂಪಿಗೆ ಸೇರಿದ ವಸ್ತುವಿಗೆ ಬದಲಾಯಿಸಿಕೊಳ್ಳುವಾಗ ವಸೂಲು ಮಾಡಿಕೊಳ್ಳುವ ಅಧಿಕ ಆದಾಯವನ್ನು ಮಿಗತೆ ಬಡ್ಡಿ ಎನ್ನಲಾಗುತ್ತದೆ.

ಪ್ರವಾದಿ(ﷺ) ಯವರು ಹೇಳಿದರು: "ಚಿನ್ನ ಚಿನ್ನಕ್ಕೆ, ಬೆಳ್ಳಿ ಬೆಳ್ಳಿಗೆ, ಗೋಧಿ ಗೋಧಿಗೆ, ಧಾನ್ಯ ಧಾನ್ಯಕ್ಕೆ, ಖರ್ಜೂರ ಖರ್ಜೂರಕ್ಕೆ, ಉಪ್ಪು ಉಪ್ಪಿಗೆ ಸಮಾನವಾಗಿ ಪರಸ್ಪರ

ಬದಲಾಯಿಸಿಕೊಳ್ಳಬೇಕು (ಮಾರಾಟ ಮಾಡಬೇಕು). ಒಬ್ಬ ಅದಕ್ಕಿಂತ ಹೆಚ್ಚು ನೀಡಿದರೆ ಅಥವಾ ಹೆಚ್ಚು ಪಡೆದರೆ ಅದು ಬಡ್ಡಿಯಾಗುತ್ತದೆ. ಇದರಲ್ಲಿ ಪಡೆಯು-ವವನು ಮತ್ತು ಕೊಡುವವನು ಸಮಾನರಾಗಿದ್ದಾರೆ." (ಬುಖಾರಿ, ಮುಸ್ಲಿಂ)

ಹದೀಸಿನ ಕೆಲವು ವಿವರಣೆಗಳಲ್ಲಿ ನೀವು ಹೆಚ್ಚುಕಮ್ಮಿ ಮಾಡಬಾರದು ಎಂದು ಹೇಳಿರುವುದನ್ನು ನೋಡಬ-ಹುದು. ಅಬೂ ಸಈದ್ ಅಲ್ ಖುದ್ರಿ(﵁) ಹೇಳುತ್ತಾ-ರೆ: ಒಮ್ಮೆ ಬಿಲಾಲ್(﵁) ಪ್ರವಾದಿ(ﷺ) ಯವರಲ್ಲಿಗೆ ಸ್ವಲ್ಪ ಬರನಿ ಖರ್ಜೂರ (ಉತ್ಕೃಷ್ಟ ಮಟ್ಟದ ಖರ್ಜೂರ) ವನ್ನು ತಂದರು. ಪ್ರವಾದಿ(ﷺ) ಯವರು ಇದು ತಮಗೆ-ಲ್ಲಿ ಸಿಕ್ಕಿತೆಂದು ಕೇಳಿದರು. ಅವರು ಹೇಳಿದರು: "ನಮ್ಮ ಬಳಿ ಸ್ವಲ್ಪ ಕೆಳದರ್ಜೆಯ ಖರ್ಜೂರಗಳಿದ್ದವು. ಅದರ ಎರಡು ಸಾಅ್ ಖರ್ಜೂರ ಕೊಟ್ಟು ಇದರ ಒಂದು ಸಾಅ್ ಪಡೆದೆನು". ಆಗ ಪ್ರವಾದಿ(ﷺ) ಯವರು ಹೇಳಿದರು:

“ಓಹೋ! ಇದು ಅಪ್ಪಟ ಬಡ್ಡಿ! ಅಪ್ಪಟ ಬಡ್ಡಿ! ಹಾಗೆ ಮಾಡಬಾರದು. ತಾವು ಖರೀದಿಸಲು ಇಚ್ಛಿಸುವುದಾದರೆ ಖರ್ಜೂರವನ್ನು ಬೇರೊಂದು ಉತ್ಪನ್ನವಾಗಿ ಮಾರಾಟ ಮಾಡಿರಿ. ಅನಂತರ ಅದನ್ನು (ಮತ್ತೊಂದನ್ನು) ಖರೀದಿಸಿರಿ.” (ಬುಖಾರಿ, ಮುಸ್ಲಿಂ)

ಒಂದು ವಸ್ತುವನ್ನು ಅದೇ ವಿಭಾಗಕ್ಕೆ ಸೇರಿದ ಮತ್ತೊಂದು ವಸ್ತುವಿಗಾಗಿ ಮಾರಾಟ ಮಾಡುವಾಗ ಮಾರುವವನು ಅಥವಾ ಖರೀದಿಸುವವನು ಹೆಚ್ಚು ತೂಕವನ್ನು ಹಸ್ತಾಂತರಿಸಿಕೊಳ್ಳುವುದು, ಇಬ್ಬರಲ್ಲಿ ಒಬ್ಬನಿಗೆ ಸಮಯಾವಕಾಶ ನೀಡುವುದು, ಬಡ್ಡಿಯ ವ್ಯವಹಾರದೊಂದಿಗೆ ಸಾಮ್ಯತೆ ಹೊಂದಿದ ಕಾರ್ಯವಾಗಿದೆ. ಒಂದೇ ಗುಂಪಿಗೆ ಸೇರಿದ ವಸ್ತುಗಳನ್ನು ಪರಸ್ಪರ ಬದಲಾಯಿಸಿಕೊಳ್ಳುವಾಗ ಅದರ ಹೆಸರಲ್ಲಿ ಹೆಚ್ಚು ವಸೂಲಿ ಮಾಡಲು ಪ್ರಯತ್ನಿಸದೆ ಪರಸ್ಪರ ಸಹಕಾರ ಮನೋಭಾವದಿಂದ ವರ್ತಿಸಬೇಕಾಗಿದೆ. ಯಾವುದೇ ವಸ್ತುವನ್ನು ಮಾರಾಟ ಮಾಡಬಹುದು.

ತನಗಿಷ್ಟವಿರುವ ವಸ್ತುವನ್ನು ಖರೀದಿಸಬಹುದು. ಪ್ರವಾದಿ (ﷺ) ಯವರು ಬಡ್ಡಿ ಕಲಬೆರಕೆಯಾಗುವ ಸಾಧ್ಯತೆಯ ಇಂತಹ ಇನ್ನೂ ಅನೇಕ ವ್ಯವಹಾರಗಳನ್ನು ನಿಷೇಧಿಸಿ-ದ್ದಾರೆ. (ಆಧಾರ: ಮುಹಮ್ಮದ್ ಅಮಾನಿ ಮೌಲವಿಯ-ವರ ಪವಿತ್ರ ಕುರ್‌ಆನ್ ವ್ಯಾಖ್ಯಾನ ಸಂಪುಟ 1, 2:275 ರ ವಿವರಣೆ)

ಅಲ್ಲಾಹು ಹೇಳುತ್ತಾನೆ:

“ಬಡ್ಡಿ ತಿನ್ನುವವರು (ಅಂತ್ಯ ದಿನದಲ್ಲಿ) ಸೈತಾನನ ಭಾದೆಯಲ್ಲಿ ಬೀಳುವ ಹುಚ್ಚನು ಏಳುವಂತೆ ಅಲ್ಲದೇ ಎದ್ದೇಳಲಾರರು. ವ್ಯಾಪಾರವು ಬಡ್ಡಿಯಂತೆಯೇ ಆಗಿದೆ ಎಂದು ಅವರು ವಾದಿಸಿದ್ದೇ ಇದಕ್ಕೆ ಕಾರಣ. ವ್ಯಾಪಾ-ರವನ್ನು ಅಲ್ಲಾಹು ಧರ್ಮಬದ್ಧಗೊಳಿಸಿದ್ದಾನೆ. ಆದರೆ ಬಡ್ಡಿಯನ್ನು ನಿಷೇಧಿಸಿದ್ದಾನೆ. ಆದ್ದರಿಂದ ಯಾರಿಗಾ-ದರೂ ತನ್ನ ರಬ್ಬಿನ ಈ ಉಪದೇಶ ತಲುಪಿ ಅವರು ಅದರಿಂದ (ಬಡ್ಡಿಯಿಂದ) ದೂರ ನಿಂತು ಬಿಟ್ಟರೆ ಹಿಂದೆ

ಗತಿಸಿದ್ದು ಅವರ ಪಾಲಿಗಿದೆ. ಅವನ ವಿಚಾರ ಅಲ್ಲಾಹನ ಕೈಯಲ್ಲಿದೆ. ಮುಂದೆ ಅದನ್ನು (ಬಡ್ಡಿ ವ್ಯವಹಾರವನ್ನು) ಮುಂದುವರಿಸುವವರು ಯಾರೋ ಅವರೇ ನರಕದವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು. ಅಲ್ಲಾಹು ಬಡ್ಡಿಯನ್ನು ನಾಶಗೊಳಿಸುತ್ತಾನೆ ಮತ್ತು ದಾನಧರ್ಮಗಳನ್ನು ಪೋಷಿಸುತ್ತಾನೆ. ಅಲ್ಲಾಹನು ಮಹಾ ಪಾಪಿಗಳು ಮತ್ತು ಕೃತಘ್ನರಾದ ಯಾರನ್ನೂ ಮೆಚ್ಚುವುದಿಲ್ಲ." (ಅಲ್ ಬಕರ 275, 276)

ಎಲ್ಲಾ ರೀತಿಯ ಬಡ್ಡಿಗಳು ನಿಷಿದ್ಧವಾಗಿವೆ. ಈ ನಿಯಮವು ಅವತೀರ್ಣವಾಗುವುದಕ್ಕೆ ಮೊದಲು ಪಡೆದ ಬಡ್ಡಿಯನ್ನು ಮರಳಿಸಬೇಕಾಗಿಲ್ಲ. ಇದರ ನಂತರ ಬಡ್ಡಿ ಪಡೆಯುವವರು ಮಹಾಪಾಪಿಗಳಾದ ಕೃತಘ್ನ ಸತ್ಯನಿಷೇಧಿಗಳಾಗುತ್ತಾರೆ. ಪುನರುತ್ಥಾನ ದಿನ ಅವರಿಗೆ ನೇರವಾಗಿ ಎದ್ದು ನಿಲ್ಲಲು ಸಾಧ್ಯವಾಗುವುದಿಲ್ಲ. ಅಂತಹವರಿಗೆ ನರಕದಲ್ಲಿ ವೇದನಾಜನಕ ಶಿಕ್ಷೆ ಕಾದಿದೆ.

## ಬಡ್ಡಿ ಮತ್ತು ವ್ಯಾಪಾರ

ಕೆಲವು ವ್ಯಾಪಾರಿಗಳು ಕೆಲವರಿಂದ ಹಣ ಸಂಗ್ರಹಿಸುತ್ತಾರೆ. ಅದೊಂದು ವ್ಯವಸ್ಥೆಯ ಪ್ರಕಾರ ವ್ಯಾಪಾರ ನಡೆಸಲು ಸಂಗ್ರಹಿಸುವ ಹಣವಾಗಿದೆ. ಪ್ರತಿ ತಿಂಗಳು ಒಂದು ನಿಶ್ಚಿತ ಮೊತ್ತ ಲಾಭವಾಗಿ ದೊರೆಯುತ್ತದೆ. ಮೂಲಧನವನ್ನು ಯಾವಾಗ ಬೇಕಾದರೂ ಮರಳಿ ಪಡೆಯಬಹುದು. ವ್ಯಾಪಾರದಲ್ಲಿ ಪಾಲುದಾರಿಕೆ ಇಲ್ಲ. ನಷ್ಟವಾಗುವಾಗ ಸಹಿಸುವ ಅಗತ್ಯವೂ ಇಲ್ಲ.

ವ್ಯಾಪಾರವಾದರೆ ಅದರಲ್ಲಿ ಭಾಗೀದಾರಿಕೆ ಇರಬೇಕು. ಲಾಭ-ನಷ್ಟದ ಪಾಲು, ಪರಿಶ್ರಮ, ಪ್ರತಿಫಲಗಳು ಪೂರ್ವನಿರ್ಧರಿತವಾಗಬೇಕು. ಇವೆಲ್ಲವನ್ನೂ ದಾಖಲಿಸಿಡಬೇಕು. ಅದರ ನಂತರವೇ ವ್ಯಾಪಾರದಲ್ಲಿ ತೊಡಗಬೇಕು. ಕೃಷಿ, ಕೈಗಾರಿಕೆ ಮೊದಲಾದ ಪ್ರತಿಯೊಂದು ಕ್ಷೇತ್ರಕ್ಕೂ ಇದು ಅನ್ವಯವಾಗುತ್ತದೆ. ಆದರೆ ಇಂತಹ ಏರ್ಪಾಡುಗಳಿಲ್ಲದೆ ಮೂಲಧನವನ್ನು ತಾನಿಚ್ಛಿಸಿದಂತೆ

ಮರಳಿ ಪಡೆಯಬಹುದೆಂಬ ಷರತ್ತಿನಲ್ಲಿ ನಿಶ್ಚಿತ ಅವಧಿ (ತಿಂಗಳು, ಅರ್ಧವಾರ್ಷಿಕ, ವಾರ್ಷಿಕ) ಯಲ್ಲಿ ನೀಡುವ ಲಾಭವು ಅಪ್ಪಟ ಬಡ್ಡಿಯಾಗಿದೆ. ಆದುದರಿಂದ ಇಂತಹ ವ್ಯವಹಾರ ಹಾಗೂ ಅದರಿಂದ ಲಭಿಸುವ ಲಾಭ ಅನುವದನೀಯವಲ್ಲ.

## ಬಡ್ಡಿ ಮತ್ತು ಬ್ಯಾಂಕ್

ಆಧುನಿಕ ಆರ್ಥಿಕ ವ್ಯವಹಾರಗಳಲ್ಲಿ ಬ್ಯಾಂಕ್ ಒಂದು ಅನಿವಾರ್ಯ ಘಟಕವಾಗಿದೆ. ಮಿಗತೆಯಾದ ಹಣವನ್ನು ಸುರಕ್ಷತೆಗಾಗಿ ಬ್ಯಾಂಕಿನಲ್ಲಿ ಇಡಬೇಕಾದ ಸಂದರ್ಭ ಎದುರಾಗಬಹುದು. ನಿರ್ಬಂಧಿತ ಪರಿಸ್ಥಿತಿಯಲ್ಲಿ ಬ್ಯಾಂಕಿನಲ್ಲಿ ಇಡುವುದು ತಪ್ಪಲ್ಲ. ಆದರೆ ಸಾಧ್ಯವಾದಷ್ಟು ಮಟ್ಟಿಗೆ ಅದನ್ನು ಕೃಷಿ, ಕೈಗಾರಿಕೆ, ವ್ಯಾಪಾರ ಮೊದಲಾದ ಉತ್ಪಾದನಾ ಕ್ಷೇತ್ರಗಳಲ್ಲಿ ತೊಡಗಿಸುವುದು ಉತ್ತಮ. ಚೆಕ್, ಡ್ರಾಫ್ಟ್ ಮುಂತಾದ ವ್ಯವಹಾರಗಳಿಗೂ ಬ್ಯಾಂಕನ್ನು

ಆಶ್ರಯಿಸಬೇಕಾಗುತ್ತದೆ. ಬ್ಯಾಂಕಿನಲ್ಲಿ ಇಟ್ಟ ಹಣವನ್ನು ಅದು ಇತರರಿಗೆ ಬಡ್ಡಿಗೆ ನೀಡುತ್ತದೆ. ಆ ಬಡ್ಡಿಯಿಂದ ಸ್ವಲ್ಪ ಅಂಶವನ್ನು ಬ್ಯಾಂಕಿನಲ್ಲಿ ಹಣ ಇಟ್ಟವರಿಗೆ ಕೊಡುತ್ತ-ದೆ. ಈ ಬಡ್ಡಿಯನ್ನು ಪಡೆಯಬಾರದು. ಎಷ್ಟು ಮೊತ್ತದ ಹಣವನ್ನು ಇಡಲಾಗಿದೆಯೋ ಅಷ್ಟೇ ಮೊತ್ತವನ್ನು ಮರಳಿ ಪಡೆಯಬೇಕು. ಬ್ಯಾಂಕಿನಲ್ಲಿರುವ ಈ ಮೊತ್ತವನ್ನು ಅದು ಕೃಷಿ, ಕೈಗಾರಿಕೆ ಮೊದಲಾದ ಕ್ಷೇತ್ರಗಳಲ್ಲಿ ತೊಡಗಿಸಿದರೆ ಅದರಿಂದ ಬರುವ ಲಾಭದ ಪಾಲನ್ನು ಪಡೆಯಬಹು-ದಾಗಿದೆ. ಆದರೆ ಬ್ಯಾಂಕಿಗೆ ನಷ್ಟವಾದರೆ ಅದನ್ನು ಹಂ-ಚಿಕೊಳ್ಳಲು ಸಿದ್ಧನಾಗಿರಬೇಕು.

## ಬಡ್ಡಿ ಮತ್ತು ಸಹಕಾರ

ಜಾಬಿರ್(ؓ) ಹೇಳುತ್ತಾರೆ: “ಬಡ್ಡಿ ತಿನ್ನುವವನು, ಅದನ್ನು ಕೊಡುವವನು, ಅದಕ್ಕೆ ಸಾಕ್ಷಿ ನಿಲ್ಲುವವನು ಹಾಗೂ ಅದನ್ನು ಬರೆದಿಡುವವನನ್ನು ಅಲ್ಲಾಹು ಶಪಿಸಿದ್ದಾನೆ

ಮತ್ತು ಈ ವಿಷಯದಲ್ಲಿ ಅವರೆಲ್ಲರೂ ಸಮಾನರಾಗಿದ್ದಾರೆ ಎಂದು ಪ್ರವಾದಿ(ﷺ) ಯವರು ಹೇಳಿದ್ದಾರೆ."

ಬಡ್ಡಿ ಪಡೆಯುವುದು ಮತ್ತು ಕೊಡುವುದು ಪಾಪವಾಗಿದೆ. ಹಾಗೆಯೇ ಅದರ ಲೆಕ್ಕಪತ್ರ ಬರೆದಿಡುವುದು ಹಾಗೂ ಸಾಕ್ಷಿ ನಿಲ್ಲುವುದು ಪಾಪವಾಗಿದೆ. ಇವೆಲ್ಲವನ್ನೂ ವರ್ಜಿಸಬೇಕೆಂದರ್ಥ.

## ಬಡ್ಡಿ ಮತ್ತು ಇನ್ಶೂರೆನ್ಸ್

ಇನ್ಶೂರೆನ್ಸ್ ನಲ್ಲಿ ಹೂಡುವ ಹಣದ ಬಹುತೇಕ ಭಾಗವನ್ನು ಬಡ್ಡಿಗೆ ನೀಡಲಾಗುತ್ತದೆ. ಹೀಗೆ ಹೂಡುವವರು ಪಡೆಯುವ ಸಾಲಕ್ಕೆ ಬಡ್ಡಿ ನೀಡಬೇಕಾಗುತ್ತದೆ. ಮತ್ತೊಂದು ಭಾಗವನ್ನು ಕೃಷಿ, ಕೈಗಾರಿಕೆ, ವ್ಯಾಪಾರ ಮೊದಲಾದ ಕ್ಷೇತ್ರಗಳಲ್ಲಿ ತೊಡಗಿಸಲಾಗುತ್ತದೆ. ಇದರಲ್ಲಿ ಬರುವ ಆದಾಯವನ್ನು ಪಡೆಯಬಹುದಾಗಿದೆ. ಆದರೆ ಬಡ್ಡಿಯ ಪಾಲು ಸ್ವೀಕರಿಸುವುದು ನಿಷಿದ್ಧ.

ಅದನ್ನು ಬೋನಸ್ ಎಂಬ ಹೆಸರಿನಲ್ಲಿ ನೀಡಿದರೂ ಬಡ್ಡಿಯೇ ಆಗುತ್ತದೆ. ಆದರೆ ಇವರೆಡನ್ನೂ ಬೇರ್ಪಡಿಸಿ ತಿಳಿಯುವುದು ಸುಲಭವಲ್ಲ. ಆದ್ದರಿಂದ ಇನ್ಶೂರೆನ್ಸ್ ಅನಿವಾರ್ಯವಾದ ಸಂದರ್ಭದಲ್ಲಿ ಬಡ್ಡಿಯ ಸ್ಪರ್ಶವಿ-ಲ್ಲದ ವಿಧವನ್ನು ಆರಿಸಬೇಕು.

## ಬಡ್ಡಿ ಮತ್ತು ಪ್ರಾವಿಡೆಂಟ್ ಫಂಡ್

ಪಿ.ಎಫ್. ಅಥವಾ ಪ್ರಾವಿಡೆಂಟ್ ಫಂಡ್ ಉದ್ಯೋಗಿಗಳು ಒಂದು ನಿಶ್ಚಿತ ಕಾಲಾವಧಿಯ ತನಕ ಸರಕಾರಕ್ಕೆ ನೀಡುವ ಸಾಲವಾಗಿದೆ. ಹೀಗೆ ಶೇವಣಿಯಾಗಿಡುವ ಹಣದ ನಿಶ್ಚಿತ ಭಾಗವನ್ನು ಕೆಲವು ನಿಯಮಕ್ಕೆ ಬದ್ಧವಾಗಿ ಸಾಲದ ರೂ-ಪದಲ್ಲಿ ಮರಳಿ ಪಡೆಯಬಹುದು. ಸೇವೆಯ ಅವಧಿ ಮುಕ್ತಾಯವಾದಾಗ ಮಾತ್ರ ಉಳಿದ ಹಣ ಸಿಗುತ್ತದೆ. ಅದರ ಜೊತೆಗೆ ಸರಕಾರದ ವತಿಯಿಂದ ಒಂದು ನಿಶ್ಚಿತ ಪಾಲು ಬಡ್ಡಿಯೂ ಸಿಗುತ್ತದೆ. ಇದು ಕೂಡ ಇಸ್ಲಾಮಿನ

ದೃಷ್ಟಿಯಲ್ಲಿ ಬಡ್ಡಿಯಾಗಿದೆ. ಆದ್ದರಿಂದ ಅದನ್ನು ಸ್ವೀಕರಿಸಬಾರದು. ಠೇವಣಿ ಇಟ್ಟ ಹಣವನ್ನು ಮಾತ್ರ ಮರಳಿ ಪಡೆಯಬೇಕು.

## ಬಡ್ಡಿ ಮತ್ತು ಆರ್.ಡಿ.

ರಿಕರಿಂಗ್ ಡಿಪೋಸಿಟ್ ಅಥವಾ ಆರ್.ಡಿ. (ಒಂದು ನಿಶ್ಚಿತ ಕಾಲಾವಧಿಗೆ ಅಂಚೆ ಕಚೇರಿಯಲ್ಲಿ ಠೇವಣಿಯಾಗಿಡುವ ಹಣ) ಪದ್ಧತಿಯಲ್ಲಿ ಅಂಚೆ ಕಚೇರಿ ಕಾಲಾವಧಿ ಮುಗಿದಾಗ ಆಕರ್ಷಕ ಬಡ್ಡಿಯೊಂದಿಗೆ ಹಣವನ್ನು ಹಿಂದಿರುಗಿಸುತ್ತದೆ. ಇದು ಕೂಡ ಬಡ್ಡಿಯಾಗಿರುವುದರಿಂದ ಸ್ವೀಕರಿಸಬಾರದು. ಇಲ್ಲಿ ಠೇವಣಿಯಾಗಿಟ್ಟ ಮೊತ್ತವನ್ನು ಮಾತ್ರ ಪಡೆದರೆ ಸಾಕು. ಇಂತಹ ಹೂಡಿಕೆ ಪದ್ಧತಿಯಲ್ಲಿ ಪಾಲ್ಗೊಳ್ಳದಿರುವುದು ಉತ್ತಮ.

## ಬಡ್ಡಿ ಮತ್ತು ಮೌಲ್ಯ ಕುಸಿತ

ವಸ್ತು, ಕರೆನ್ಸಿ, ನಾಣ್ಯ ಮೊದಲಾದವುಗಳ ಕ್ರಯ ಸಾಮ-

ರ್ಥ್ಯವೇ ಅವುಗಳ ಮೌಲ್ಯವಾಗಿದೆ. ಅದರ ಸೂಚ್ಯಂಕದಲ್ಲಿ ಕುಸಿತ, ಏರಿಕೆ ಕಾಣಬಹುದು. ಅಥವಾ ಸೂಚಂಕ ತಟಸ್ಥವಾಗಿರಬಹುದು. ಮೌಲ್ಯದ ಕುಸಿತವನ್ನು ತಡೆಯಲು ಸಾಲಗಾರನು ಹೆಚ್ಚು ನೀಡಿದರೆ ಅದು ಬಡ್ಡಿಯಾಗುವುದಿಲ್ಲ ಎಂಬ ವಾದವಿದೆ. ಆದರೆ ಮೌಲ್ಯದಲ್ಲಿ ಹೆಚ್ಚು ಕಂಡುಬಂದರೆ ಸಾಲಗಾರನು ಪಡೆದ ಮೊತ್ತದಲ್ಲಿ ರಿಯಾಯಿತಿ ತೋರಿಸಲಾಗುತ್ತದೆಯೇ ಎಂಬ ಪ್ರಶ್ನೆಗೆ ಅವರಲ್ಲಿ ಉತ್ತರವಿಲ್ಲ. ಏನಿದ್ದರೂ ಅಲ್ಲಾಹು ಎಚ್ಚರಿಸುತ್ತಾನೆ:

"ಓ ಸತ್ಯ ವಿಶ್ವಾಸಿಗಳೇ! ಅಲ್ಲಾಹನನ್ನು ಭಯಪಡಿರಿ. ನೀವು ನಿಜಕ್ಕೂ ಸತ್ಯವಿಶ್ವಾಸಿಗಳಾಗಿದ್ದರೆ ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟುಬಿಡಿ. ನೀವು ಹಾಗೆ ಮಾಡದಿದ್ದರೆ ಅಲ್ಲಾಹು ಮತ್ತು ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧದ ಘೋಷಣೆ ಇದೆಯೆಂದು ನಿಮಗೆ ತಿಳಿದಿರಲಿ. ಯಾರಾದರೂ ಪಶ್ಚಾತ್ತಾಪ ಪಟ್ಟರೆ (ಬಡ್ಡಿಯನ್ನು ವರ್ಜಿಸಿದರೆ) ಅಸಲು ಹಣ

ಪಡೆಯಲು ಹಕ್ಕುದಾರರಾಗುತ್ತಾರೆ. ನೀವು ಅನ್ಯಾಯ-ವೆಸಗಬಾರದು. ನಿಮಗೂ ಅನ್ಯಾಯವಾಗಬಾರದು. ನಿಮ್ಮ ಸಾಲಗಾರನು ಅಸಮರ್ಥನಾಗಿದ್ದರೆ ಅವನ ಸ್ಥಿತಿ ಸುಧಾರಿಸುವ ತನಕ ಅವನಿಗೆ ಕಾಲಾವಕಾಶ ನೀಡಿರಿ. ನೀವು ಸಾಲವನ್ನು ಮನ್ನಾ ಮಾಡಿದರೆ ಅದು ನಿಮ್ಮ ಮಟ್ಟಿಗೆ ಅತ್ಯುತ್ತಮವಾಗಿದೆ. ನೀವು ತಿಳಿದವರಾಗಿದ್ದರೆ ಅಲ್ಲಾಹನ ಕಡೆಗೆ ಮರಳಿಸಲಾಗುವ ದಿನದ ಅವಮಾನ ಹಾಗೂ ಕಷ್ಟದ ಕುರಿತು ಭಯಪಡಿರಿ. ಅಲ್ಲಿ ಪ್ರತಿಯೊ-ಬ್ಬನಿಗೂ ಅವನು ಗಳಿಸಿದ ಪುಣ್ಯ ಅಥವಾ ಪಾಪಗಳ ಸಂಪೂರ್ಣ ಪ್ರತಿಫಲವನ್ನು ನೀಡಲಾಗುವುದು. ಯಾರ ಮೇಲೂ ಎಷ್ಟು ಮಾತ್ರಕ್ಕೂ ಅನ್ಯಾಯವಾಗಲಾರದು." (2:278-281)

ಈ ಆಯತ್ ಅವತೀರ್ಣವಾಗುವುದಕ್ಕೆ ಮೊದಲು ಅನೇಕ ಮಂದಿ ಸಾಲ ಕೊಟ್ಟು ಬಡ್ಡಿ ಪಡೆಯುತ್ತಿದ್ದರು. ಅವರಿಗೆ ಸಾಲ ನೀಡಿದ ಮೊತ್ತದ ಜೊತೆಗೆ ಬಡ್ಡಿಯು

ಸಿಗುತ್ತಿತ್ತು. ಆದರೆ ಈ ಆಯತ್ ಅವತೀರ್ಣವಾಗು-ವುದರೊಂದಿಗೆ ಸಾಲದ ಮೊತ್ತವನ್ನು ಮಾತ್ರ ಮರಳಿ ಪಡೆಯಬೇಕೆಂಬ ಆದೇಶವಾಗುತ್ತದೆ. ಬಡ್ಡಿಯನ್ನು ಸಂಪೂರ್ಣವಾಗಿ ವರ್ಜಿಸಬೇಕು. ಇದಕ್ಕೆ ಸಿದ್ಧರಿಲ್ಲದಿದ್ದರೆ ಅಂಥವರೊಂದಿಗೆ ಅಲ್ಲಾಹು ಮತ್ತು ಅವನ ಸಂದೇಶ-ವಾಹಕರು ಯುದ್ಧ ಘೋಷಿಸುತ್ತಾರೆ ಎಂಬ ಕಟುವಾದ ಎಚ್ಚರಿಕೆಯನ್ನು ನೀಡಲಾಯಿತು. ಈ ತನಕ ಬಡ್ಡಿಗೆ ಸಾಲ ನೀಡಿದ್ದು ಪಾಪವಾಯಿತೆಂಬ ಆತ್ಮಾರ್ಥವಾದ ಪಶ್ಚಾತಾ-ಪವಿರುವವರಿಗೆ ಮಾತ್ರ ಮೂಲಧನ ಪಡೆಯುವ ಹಕ್ಕು ಇರುತ್ತದೆ. ಇಂತಹ ಪಶ್ಚಾತಾಪ ಇರದವರು ಮೂಲ-ಧನವನ್ನು ಕೂಡ ಪಡೆಯುವ ಹಕ್ಕನ್ನು ಕಳೆದುಕೊಳ್ಳು-ತ್ತಾರೆ. ಮೂಲಧನಕ್ಕಿಂತ ಹೆಚ್ಚು ಪಡೆದು ಜನರ ಮೇಲೆ ಅನ್ಯಾಯವೆಸಗಬಾರದು. ಅದೇ ರೀತಿ ಮೂಲ ಧನ-ಕ್ಕಿಂತ ಕಡಿಮೆ ಕೊಟ್ಟು ಸಾಲಗಾರನು ಸಾಲ ನೀಡಿದವರ ಮೇಲೂ ಅನ್ಯಾಯವೆಸಗಬಾರದು. ಸಾಲಗಾರನಿಗೆ

ಸಾಲ ಸಂದಾಯ ಸದ್ಯದ ಪರಿಸ್ಥಿತಿಯಲ್ಲಿ ಅಸಾಧ್ಯವಾದರೆ ಅವನಿಗೆ ಕಾಲಾವಕಾಶ ಕೊಡಬೇಕು. ಇನ್ನು ಸಾಲ ಸಂದಾಯಕ್ಕೆ ಮಾರ್ಗವೇ ಇಲ್ಲ ಎಂದಾದರೆ ಅಂತಹ ದುರ್ಬಲರಿಗೆ ಅದನ್ನು ದಾನವಾಗಿ ಬಿಟ್ಟುಬಿಡುವುದು ಉತ್ತಮವಾಗಿದೆ.

ಪ್ರವಾದಿ(ﷺ) ಯವರು ಹೇಳುತ್ತಾರೆ: "ಸಂಕಷ್ಟದಲ್ಲಿರುವವರಿಗೆ ಯಾರು ವಾಸ್ತವ್ಯದ ಏರ್ಪಾಡು ಮಾಡುತ್ತಾರೋ (ಅಥವಾ ಸಾಲವನ್ನು ದಾನವಾಗಿ) ಬಿಟ್ಟು ಬಿಡುತ್ತಾರೋ ಅವರಿಗೆ ಅಲ್ಲಾಹು ಅವನ ನೆರಳು ಮಾತ್ರ ಇರುವ ದಿನದಂದು ನೆರಳು ನೀಡುವನು." (ಅಹ್ಮದ್, ಮುಸ್ಲಿಂ)

ಆದರೆ ಸಾಲ ಪಡೆಯುವವನು ಅದನ್ನು ಸಂದಾಯ ಮಾಡುವ ಉದ್ದೇಶವನ್ನಿಟ್ಟುಕೊಂಡೇ ಸಾಲ ಪಡೆಯಬೇಕು. ಅವಧಿಗೆ ಸಂದಾಯ ಮಾಡಲು ಅಸಾಧ್ಯವಾದರೆ ಉಭಯತ್ರರ ಒಪ್ಪಿಗೆ ಪ್ರಕಾರ ಅವಧಿಯನ್ನು ಮುಂದೂಡಬೇಕು. ಸಾಲ ತೀರಿಸುವ ಸಾಧ್ಯತೆಗಳಿದ್ದರೂ ತೀರಿಸದೆ

ಅವಧಿಯನ್ನು ಮುಂದೂಡುವುದು ಅನ್ಯಾಯವಾಗಿದೆ.

ಪ್ರವಾದಿ(ﷺ) ಯವರು ಹೇಳುತ್ತಾರೆ: "ಕ್ಲಪ್ತ ಸಮಯಕ್ಕೆ ಸಾಲವನ್ನು ಮರು ಸಂದಾಯ ಮಾಡುವವನು ಜನರ ಪೈಕಿ ಅತ್ಯುತ್ತಮನು." (ಮುಸ್ಲಿಂ)

ಸಾಲ ಸಂದಾಯ ಮಾಡದೆ ಅಥವಾ ಸಂದಾಯ ಮಾಡುವ ಜವಾಬ್ದಾರಿಯನ್ನು ಯಾರಿಗೂ ವಹಿಸಿಕೊ-ಡದೆ ಮರಣ ಹೊಂದುವುದರ ಬಗ್ಗೆ ಜಾಗರೂಕರಾ-ಗಿರಬೇಕು. ಕಾರಣವೇನೆಂದರೆ ಸಾಲವನ್ನು ಅಲ್ಲಾಹು ಕ್ಷಮಿಸುವುದಿಲ್ಲವೆಂದು ಜಿಬ್ರೀಲ್(عليه السلام) ರು ತಮಗೆ ತಿಳಿಸಿರುವುದಾಗಿ ಪ್ರವಾದಿ(ﷺ) ಯವರು ಮತ್ತೊಂದು ಹದೀಸ್ ನಲ್ಲಿ ನಮಗೆ ಕಲಿಸಿಕೊಟ್ಟಿದ್ದಾರೆ. (ಮುಸ್ಲಿಂ)

ಬಡ್ಡಿ ಶೋಷಣೆಯ ಉಪಾಧಿಯಾಗಿದೆ ಎನ್ನುವುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಕುರ್ಆನ್ ಅವತೀರ್ಣವಾದ ಕಾಲದಲ್ಲಿ ಬಡ್ಡಿ ವ್ಯವಹಾರ ಪರಾಕಾಷ್ಠೆಯಲ್ಲಿತ್ತು. ಆದರೆ

ಪವಿತ್ರ ಕುರ್‌ಆನ್ ವಸ್ತುಸ್ಥಿತಿಗೆ ಅಂಜಿ ರಾಜಿ ಮಾಡದೆ ಬಡ್ಡಿಯ ಎಲ್ಲ ಸ್ವರೂಪಗಳನ್ನು ವಸ್ತುಶಃ ನಿಷೇಧಿಸಿತು. ಬಡ್ಡಿಗಾಗಿ ಸಾಲ ನೀಡಿದವರು ಬಡ್ಡಿಯನ್ನು ಬಿಟ್ಟುಕೊಟ್ಟು ಮೂಲಧನವನ್ನು ಮಾತ್ರ ಮರಳಿ ಪಡೆಯಬೇಕೆಂಬ ಆದೇಶವಾಗುತ್ತದೆ. ಈ ತನಕ ಬಡ್ಡಿಯ ವ್ಯವಹಾರದಲ್ಲಿ ನಿರತರಾಗಿದ್ದಕ್ಕೆ ಪಶ್ಚಾತ್ತಾಪ ಪಡಬೇಕು. ಇಲ್ಲಿ ಅದಕ್ಕೆ ಕಾಲ ವ್ಯಾಪ್ತಿ, ಮೌಲ್ಯ ಕುಸಿತ, ಮೌಲ್ಯವರ್ಧನೆ ಮುಂತಾದ ಯಾವುದನ್ನು ಉಪಾಧಿಯಾಗಿ ನಿಶ್ಚಯಿಸಲ್ಪಟ್ಟಿಲ್ಲ, ಆದ್ದರಿಂದ ಮೌಲ್ಯ ಕುಸಿತದ ಹೆಸರಲ್ಲಿ ತೊಡಗಿಸಿದ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಪಡೆಯುವಂತಿಲ್ಲ. ಹಾಗೆ ಸ್ವೀಕರಿಸುವ ಮೊತ್ತ ಬಡ್ಡಿಯಾಗುತ್ತದೆ. ಅದು ಅನ್ಯಾಯ. ಅದೇ ರೀತಿ ಮೌಲ್ಯವರ್ಧನೆಯ ಹೆಸರಿನಲ್ಲಿ ಬಂಡವಾಳದಲ್ಲಿ ಕಡಿಮೆ ಮಾಡುವ ಅವಕಾಶವೂ ಇಲ್ಲ.

## ಬಡ್ಡಿ ಮತ್ತು ದಾನ

“ಓ ಸತ್ಯವಿಶ್ವಾಸಿಗಳೇ! ನೀವು ಸಂಪಾದಿಸಿದ ಒಳ್ಳೆಯ ವಸ್ತುಗಳಿಂದ ಮತ್ತು ನಿಮಗೆ ನಾವು ಭೂಮಿಯಿಂದ ಉತ್ಪಾದಿಸಿಕೊಟ್ಟ ವಸ್ತುಗಳಿಂದ ಖರ್ಚು ಮಾಡಿರಿ. ಹಾಳಾದ ವಸ್ತುಗಳನ್ನು ದಾನ ಮಾಡಲು ನೀವು ಮನಸ್ಸು ಮಾಡಬಾರದು. ವಸ್ತುತಃ ಅದೇ ವಸ್ತುವನ್ನು ಯಾರಾದರೂ ನಿಮಗೆ ಕೊಟ್ಟರೆ ನಿರ್ಲಕ್ಷದ ಹೊರತು ನೀವದನ್ನು ಸ್ವೀಕರಿಸಲು ಇಷ್ಟಪಡಲಾರಿರಿ. ನಿಶ್ಚಯವಾಗಿ ಅಲ್ಲಾಹನು ನಿರಪೇಕ್ಷನೂ ಸ್ತುತ್ಯರ್ಹನೂ ಆಗಿರುತ್ತಾನೆ.” (2:267)

ದಾನಮಾಡುವ ವಸ್ತುಗಳೆಲ್ಲವೂ ಉತ್ತಮವಾಗಿರಬೇಕು. ಸ್ವಯಂ ಸ್ವೀಕರಿಸಲು ಇಷ್ಟಪಡದ ಕೆಟ್ಟ ವಸ್ತುಗಳನ್ನು ದಾನ ಮಾಡಬಾರದು. ಇಬ್ನ್ ಮಸ್‌ಊದ್(﵁) ರಿಂದ ವರದಿ: ಪ್ರವಾದಿ(ﷺ) ಯವರು ಹೇಳುತ್ತಾರೆ: “ಒಬ್ಬ ದಾಸನು ನಿಷಿದ್ಧ ಮಾರ್ಗದಲ್ಲಿ ಸಂಪಾದಿಸಿದ ಧನದಿಂದ

ದಾನ ನೀಡಿದರೆ ಅದು ಸ್ವೀಕಾರವಾಗುವುದಿಲ್ಲ. ವೆಚ್ಚ ಮಾಡಿದರೆ ಬರ್ಕತ್ (ಸಮೃದ್ಧಿ) ದಯಪಾಲಿಸಲಾಗು-ವುದಿಲ್ಲ. ಅದನ್ನು ಉಳಿಸಿಕೊಂಡು ಮರಣ ಹೊಂದಿದರೆ ಅದು ನರಕದ ಕಡೆಗಿನ ಅವನ ಪ್ರಯಾಣಕ್ಕೆ ಸಮಾನ-ವಾಗಿರುತ್ತದೆ." (ಅಹ್ಮದ್)

ನಿಷಿದ್ಧ, ಕೆಳದರ್ಜೆಯ, ಹಾಳಾದ, ಕುಂದುಕೊರತೆಗಳಿ-ರುವ ವಸ್ತುಗಳನ್ನು ದಾನ ಮಾಡಬಾರದು.

## ಬಿಟ್ಟು ಬಿಡಲಾಗದ ಬಡ್ಡಿ

ಬಡ್ಡಿಯನ್ನು ಯಾವ ನೆಲೆಯಲ್ಲಿಯೂ ಬಿಟ್ಟು ಬಿಡದೆ ಸ್ವೀಕರಿಸಲು ನಿರ್ಬಂಧವಾಗುವ ಪರಿಸ್ಥಿತಿ ಎದುರಾಗಬ-ಹುದು. ಆದರೆ ಅದನ್ನು ಕೂಡ ಸ್ವಂತ ಅಗತ್ಯಕ್ಕಾಗಿ ಉಪ-ಯೋಗಿಸಬಾರದು. ಆ ಹಣವನ್ನು ಮುಸ್ಲಿಮರ ಸಾರ್ವ-ತ್ರಿಕ ಒಳಿತಿಗಾಗಿ ಉಪಯೋಗಿಸಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹಣವನ್ನು ವ್ಯರ್ಥವಾಗಿ ಕಳೆ-

ದುಕೊಳ್ಳಬಾರದು ಎನ್ನುವುದೇ ಇದಕ್ಕೆ ಕಾರಣವಾಗಿದೆ.

## ಬಡ್ಡಿ ಮತ್ತು ತವಕ್ಕುಲ್

ಬ್ಯಾಂಕ್ ಮತ್ತಿತರ ಸಂಸ್ಥೆಗಳಲ್ಲಿ ಸಂಗ್ರಹವಾಗುವ ಬಡ್ಡಿ ಸತ್ಯವಿಶ್ವಾಸಿಗಳು ಸ್ವೀಕರಿಸದೆ ಇರುವುದರಿಂದ ಅದು ಅವರ ಶತ್ರುಗಳ ಕೈಸೇರಿ ಅವರ ವಿರುದ್ಧ ಬಳಕೆಯಾಗುವ ಸಾಧ್ಯತೆ ಇದೆ ಎಂದು ಕೆಲವರು ಭಯಪಡುತ್ತಾರೆ. ಈ ಅಪಾಯವನ್ನು ತಪ್ಪಿಸಲು ಬಡ್ಡಿ ಪಡೆಯಬೇಕೆಂದು ಅವರು ಅಭಿಪ್ರಾಯಪಡುತ್ತಾರೆ. ಈ ಒಂದು ಸಾಧ್ಯತೆ ಅಲ್ಲಾಹನಿಗೆ ಚೆನ್ನಾಗಿ ತಿಳಿದಿದೆಯಷ್ಟೇ. ಆದರೆ ಇಂತಹ ಪರಿಸ್ಥಿತಿಯಲ್ಲಿ ಬಡ್ಡಿ ಸ್ವೀಕರಿಸಬಹುದೆಂದು ಕುರ್‌ಆನಿನಲ್ಲಿ ಅಥವಾ ಹದೀಸ್‌ನಲ್ಲಿ ಆಧಾರಗಳಿಲ್ಲ. ಮಾತ್ರವಲ್ಲ ಅಲ್ಲಾಹು ನಿಷೇಧಿಸಿದ ಬಡ್ಡಿಯನ್ನು ವರ್ಜಿಸಿದ ಹೆಸರಲ್ಲಿ ಅಲ್ಲಾಹು ಸತ್ಯವಿಶ್ವಾಸಿಗಳನ್ನು ಪರೀಕ್ಷಿಸುತ್ತಾನೆ ಅಥವಾ ಶಿಕ್ಷಿಸುತ್ತಾನೆ ಎಂಬ ಭಯ ನಿರರ್ಥಕವಾಗಿದೆ. ಏಕೆಂದರೆ

ಅಲ್ಲಾಹು ಹೇಳುತ್ತಾನೆ:

“ಅಲ್ಲಾಹು ಎಂದು ಹೇಳುವಾಗ ಅವರ ಮನ ನಡುಗುವ ಮತ್ತು ಅವನ ವಚನಗಳನ್ನು ಓದಿ ಕೇಳಿಸಲಾದಾಗ ಅವರೊಳಗಿನ ವಿಶ್ವಾಸ ಇನ್ನಷ್ಟು ವರ್ಧಿಸುವ ಹಾಗೂ ತಮ್ಮ ರಬ್ಬಿನಲ್ಲಿ ಸಂಪೂರ್ಣ ಭರವಸೆ ಇಡುವವರೇ ಸತ್ಯವಿಶ್ವಾಸಿಗಳು.” (8:2)

“ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹನಿಗೆ ಸಹಾಯ ಮಾಡಿದರೆ ಅವನು ನಿಮಗೆ ಸಹಾಯ ಮಾಡುವನು ಮತ್ತು ನಿಮ್ಮ ಪಾದಗಳನ್ನು ಸ್ಥಿರಗೊಳಿಸುವನು.” (47:7)

ಆಧುನಿಕ ಆರ್ಥಿಕ ವ್ಯವಹಾರಗಳಲ್ಲಿ ಹೆಚ್ಚಿನವುಗಳು ಬಡ್ಡಿಯಲ್ಲಿ ಅಧಿಷ್ಠಿತವಾಗಿವೆ. ಅನೇಕ ವ್ಯವಹಾರಗಳಲ್ಲಿ ಸಂಕೀರ್ಣತೆ ಭಾಸವಾಗಬಹುದು. ಇಂತಹ ಪರಿಸ್ಥಿತಿಯಲ್ಲಿ ಸಂಕೀರ್ಣತೆಯಿಂದ ಮುಕ್ತವಾದುದನ್ನು ಆರಿಸಬೇಕು. ಬಡ್ಡಿ ಹರಾಮ್ ಎಂಬ ಕುರ್‌ಆನಿನ ಘೋಷಣೆ

ಹಾಗೂ ಈ ನಿಟ್ಟಿನಲ್ಲಿ ಇರುವ ಪ್ರವಾದಿ(ﷺ) ಯವರ ಉಪದೇಶಗಳನ್ನು ಮೈಗೂಡಿಸಿಕೊಂಡು ಪ್ರತಿಯೊಂದು ಕ್ರಯ-ವಿಕ್ರಯ, ಆರ್ಥಿಕ ವ್ಯವಹಾರ ಸೇರಿದಂತೆ ಎಲ್ಲಾ ಕಾರ್ಯಗಳಲ್ಲಿ ಅದನ್ನು ಪಾಲಿಸಬೇಕು. ಅಲ್ಲಾಹನಿಗೆ ಸಹಾಯ ಮಾಡುವವರಿಗೆ ಅಲ್ಲಾಹು ಸಹಾಯ ಮಾಡುತ್ತಾನೆ ಮತ್ತು ಅವರ ಪಾದಗಳನ್ನು ಸ್ಥಿರಗೊಳಿಸಿ ಶತ್ರುಗಳ ಮೇಲೆ ವಿಜಯ ದಯಪಾಲಿಸುತ್ತಾನೆ. ಇದು ಅವನೇ ನೀಡಿದ ವಾಗ್ದಾನವಾಗಿದೆ. ಅಲ್ಲಾಹು ಎಂದೆಂದಿಗೂ ತನ್ನ ವಾಗ್ದಾನವನ್ನು ಉಲ್ಲಂಘಿಸುವುದಿಲ್ಲ.


الحركة النصيحة الإسلامية

**ANNASEEHA ISLAMIC MOVEMENT**

SURATKAL, MANGALORE - 575 014
MOB: 9731593091 / 9945171612

---

**Jamiyathe Ahle Hadees Mangalore**